# ಕರ್ನಾಟಕ ವಿಧಾನ ಪರಿಷತ್

| | |
|---|---|
| ಸದಸ್ಯರ ಹೆಸರು | ಶ್ರೀ ಬಸವರಾಜ ಪಾಟೀಲ್ ಇಟಗಿ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ) |
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 673 (798) |
| ಉತ್ತರಿಸಬೇಕಾದ ದಿನಾಂಕ | 09-03-2021 |
| ಉತ್ತರಿಸಬೇಕಾದವರು | ನಗರಾಭಿವೃದ್ಧಿ ಸಚಿವರು |

| ಕ್ರ ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಕಳೆದ 02 ವರ್ಷಗಳಿಂದ ರಾಯಚೂರು ಪಟ್ಟಣದಲ್ಲಿ ಯು.ಜಿ.ಡಿ. ಕಾಮಗಾರಿಯು ಮಂದಗತಿಯಲ್ಲಿ ನಡೆಯುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಬಂದಿದೆ. |
| ಆ) | ಬಂದಿದ್ದಲ್ಲಿ, ಈ ಬಗ್ಗೆ ಸರ್ಕಾರ ಕೈಗೊಂಡ ಕ್ರಮವೇನು; | ಕರ್ನಾಟಕ ನಗರ ನೀರು ಸರಬರಾಜು ಮತ್ತು ಒಳ ಚರಂಡಿ ಮಂಡಳಿ ವತಿಯಿಂದ ರಾಯಚೂರು ನಗರದಲ್ಲಿ ಕೇಂದ್ರ ಪುರಸ್ಕೃತ ಅಮೃತ್ ಯೋಜನೆಯಡಿ ಮೂರು ಒಳಚರಂಡಿ ಕಾಮಗಾರಿಗಳನ್ನು ಕೈಗೊಂಡಿದ್ದು ಅದರ ವಿವರಗಳು ಈ ಕೆಳಗಿನಂತಿದೆ.<br>ಯರಮರಸ್ ಮತ್ತು ಭಾಗಶಃ ಹೊಸೂರು ವಲಯಗಳಿಗೆ 129 ಕಿ.ಮೀ. ಉದ್ದದ ಒಳ ಚರಂಡಿ ಕೊಳವೆ ಮಾರ್ಗ, 5.50 ಎಮ್.ಎಲ್.ಡಿ. ಮಲೀನ ನೀರು ಸಂಸ್ಕರಣಾ ಘಟಕ, 02 ವೆಟ್‌ವೆಲ್ ಹಾಗೂ 15,402 ಒಳಚರಂಡಿ ಗೃಹ ಸಂಪರ್ಕ ಅಳವಡಿಸುವ ರೂ.99.80 ಕೋಟಿಗಳ ಯೋಜನೆಯನ್ನು 03 ವರ್ಷಗಳೊಳಗೆ ಪೂರ್ಣಗೊಳಿಸಲು ಹಾಗೂ ಯಕ್ಲಾಸ್‌ಪುರ ವಲಯದಲ್ಲಿನ ವಾರ್ಡ ನಂ.16, 18 ಮತ್ತು 21ರಲ್ಲಿ 21.14 ಕಿ.ಮೀ. ಉದ್ದದ ಒಳ ಚರಂಡಿ ಕೊಳವೆ ಮಾರ್ಗ, 01 ವೆಟ್‌ವೆಲ್, ಪಂಪಿಂಗ್ ಮೆಷಿನರಿ ಮತ್ತು 3,384 ಒಳಚರಂಡಿ ಗೃಹ ಸಂಪರ್ಕ ಅಳವಡಿಸುವ ರೂ.16.42 ಕೋಟಿಗಳ ಯೋಜನೆಯನ್ನು ಒಂದು ವರ್ಷಗಳೊಳಗೆ ಪೂರ್ಣಗೊಳಿಸಲು ಯೋಜಿಸಲಾಗಿದ್ದು, |

| | | |
|---|---|---|
| | | ಸದರಿ ಕಾಮಗಾರಿಗಳನ್ನು ಕ್ರಮವಾಗಿ ದಿನಾಂಕ 04-03-2021 ಹಾಗೂ ದಿನಾಂಕ 23-10-2020 ರಂದು ಚಾಲನೆಗೊಳಿಸಲಾಗಿದೆ. ಕಾಮಗಾರಿಗಳನ್ನು ಪೂರ್ಣಗೊಳಿಸುವಲ್ಲಿ ಭೂ-ಸ್ವಾಧೀನ, ರಾಷ್ಟ್ರೀಯ<br>1) ಹೆದ್ದಾರಿ ಹಾಗೂ ಲೋಕೋಪಯೋಗಿ ಇಲಾಖೆಗಳಿಂದ ಒಳಚರಂಡಿ ಕೊಳವೆ ಮಾರ್ಗ ಅಳವಡಿಸಲು ಅನುಮತಿ ಮತ್ತು ಸ್ಥಳೀಯ ಸಾರ್ವಜನಿಕರ ಅಡತಡೆಯಿಂದ ವಿಳಂಬವಾಗಿರುತ್ತದೆ. ಮೇಲ್ಕಂಡ ಎಲ್ಲಾ ಅಡಚಣೆಗಳನ್ನು ಜಿಲ್ಲಾಧಿಕಾರಿ, ಸ್ಥಳೀಯ ಸಂಸ್ಥೆ ಹಾಗೂ ಎಲ್ಲಾ ಸಾರ್ವಜನಿಕರ ಸಹಕಾರದಿಂದ ಅನುಮತಿ ಪಡೆದು ಕಾಮಗಾರಿಯನ್ನು ಚಾಲನೆಗೊಳಿಸಲಾಗಿದೆ. ಸದರಿ ಕಾಮಗಾರಿಗಳಿಗೆ ಫೆಬ್ರವರಿ-2021ರ ಅಂತ್ಯಕ್ಕೆ ಕ್ರಮವಾಗಿ ರೂ.70.52 ಮತ್ತು ರೂ.12.21 ಕೋಟಿಗಳ ವೆಚ್ಚವಾಗಿರುತ್ತದೆ.<br>2) ರಾಯಚೂರು ನಗರದ ಒಳಚರಂಡಿ ಯೋಜನೆಯಡಿ ಯಕ್ಲಾಸ್‌ಪುರ ಮತ್ತು ಅಸ್ಕಿಹಾಳದಲ್ಲಿ 15.86 ಕಿ.ಮೀ. ಉದ್ದದ ಒಳಚರಂಡಿ ಕೊಳವೆ ಮಾರ್ಗ, 01 ವೆಟ್‌ವೆಲ್, ಪಂಪಿಂಗ್ ಮೆಷಿನರಿ ಮತ್ತು ವಾರ್ಡ ನಂ.13 ರಿಂದ 22 ರಲ್ಲಿ ಬಿಟ್ಟು ಹೋದ ಒಳಚರಂಡಿ ಕೊಳವೆ ಮಾರ್ಗ ಅಳವಡಿಸುವ ರೂ.9.67 ಕೋಟಿಗಳ ಯೋಜನೆಯನ್ನು ಆರು ತಿಂಗಳಲ್ಲಿ ಪೂರ್ಣಗೊಳಿಸಲು ಯೋಜಿಸಿ, ದಿನಾಂಕ:21-03-2020 ರಂದು ಕಾಮಗಾರಿ ಆದೇಶ ನೀಡಲಾಗಿತ್ತು. ಸದರಿ ಕಾಮಗಾರಿಯನ್ನು ದಿನಾಂಕ 10-11-2020 ರೊಳಗಾಗಿ ಪೂರ್ಣಗೊಳಿಸಬೇಕಾಗಿರುತ್ತದೆ. ಆದರೆ ಕೋವಿಡ್-19 ಲಾಕ್‌ಡೌನ್‌ದಿಂದಾಗಿ ಕಾಮಗಾರಿಯು ವಿಳಂಬವಾಗಿರುತ್ತದೆ. ಇಲ್ಲಿಯವರೆಗೆ ಕಾಮಗಾರಿಯು ಶೇ.20% ರಷ್ಟು ಪೂರ್ಣಗೊಂಡಿದ್ದು, ಜೂನ್-2021 ರೊಳಗಾಗಿ ಪೂರ್ಣಗೊಳಿಸಿ ಚಾಲನೆಗೊಳಿಸಲಾಗುವುದು. ಸದರಿ ಕಾಮಗಾರಿಗೆ ಫೆಬ್ರವರಿ-2021 ರ ಅಂತ್ಯಕ್ಕೆ ರೂ.1.13 ಕೋಟಿಗಳು ವೆಚ್ಚವಾಗಿರುತ್ತದೆ. |

| | | |
|---|---|---|
| ಇ) | ಕಾಮಗಾರಿ ವಿಳಂಭಕ್ಕೆ ಗುತ್ತಿಗೆದಾರರ ಮೇಲೆ ಸರ್ಕಾರ ಕೈಗೊಂಡ ಕ್ರಮವೇನು ಮತ್ತು ಸದರಿ ಕಾಮಗಾರಿಯನ್ನು ಯಾವಾಗ ಪೂರ್ಣಗೊಳಿಸಲಾಗುವುದು ? (ವಿವರ ನೀಡುವುದು) | ಕಾಮಗಾರಿಗಳನ್ನು ವಿಳಂಬಗೊಳಿಸಿದ ಗುತ್ತಿಗೆದಾರರ ಮೇಲೆ ಟೆಂಡರ್ ನಿಯಮಾವಳಿಯಂತೆ ಮೇಲಿನ 03 ಕಾಮಗಾರಿಗಳ ಗುತ್ತಿಗೆದಾರರಿಗೆ ಅನುಕ್ರಮವಾಗಿ ರೂ.45.00 ಲಕ್ಷ, ರೂ.12.00 ಲಕ್ಷ ಮತ್ತು ರೂ.1.00 ಲಕ್ಷಗಳ ದಂಡ ವಿಧಿಸಲಾಗಿದೆ. ಸದರಿ ಕಾಮಗಾರಿಗಳನ್ನು ಜೂನ್-2021 ರೊಳಗಾಗಿ ಪೂರ್ಣಗೊಳಿಸಿ ಚಾಲನೆಗೊಳಿಸಲಾಗುವುದು. |

**ಸಂಖ್ಯೆ: ನಅಇ 59 ಯುಎಂಎಸ್ 2021**

**(ಬಿ.ಎ.ಬಸವರಾಜ)**
**ನಗರಾಭಿವೃದ್ಧಿ ಸಚಿವರು**